# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 346**
**ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್**
**(ನಾಮನಿರ್ದೇಶನ ಹೊಂದಿದವರು)**
**ಉತ್ತರಿಸಬೇಕಾದ ದಿನಾಂಕ : 15.12.2021**
**ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು**

| ಪ್ರಶ್ನೆ | ಉತ್ತರ |
|---|---|
| **(ಅ)** ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸಂಭವಿಸಿದ ನೆರೆ ಹಾವಳಿಗೆ ಕೇಂದ್ರ ಸರ್ಕಾರ ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿದ ಅನುದಾನವೆಷ್ಟು; | ಕಳೆದ ಮೂರು ವರ್ಷಗಳಲ್ಲಿ ಸಂಭವಿಸಿದ ನೆರೆ ಹಾವಳಿಗೆ ಕೇಂದ್ರ ಸರ್ಕಾರವು NDRFರಡಿ ಈ ಕೆಳಕಂಡಂತೆ ರಾಜ್ಯ ಸರ್ಕಾರಕ್ಕೆ ಅನುದಾನ ಬಿಡುಗಡೆಗೊಳಿಸಲಾಗಿದೆ:<br><br>2019ನೇ ಸಾಲಿನ ಆಗಸ್ಟ್ ಪ್ರವಾಹ – ರೂ.1652.85ಕೋಟಿ<br>2020ನೇ ಸಾಲಿನ ಆಗಸ್ಟ್ ಪ್ರವಾಹ – ರೂ.577.84ಕೋಟಿ<br>2020ನೇ ಸಾಲಿನ ಸೆಪ್ಟೆಂಬರ್-ಅಕ್ಟೋಬರ್ ಪ್ರವಾಹ – ರೂ.740.46ಕೋಟಿ<br>2021ನೇ ಸಾಲಿನ ಜುಲೈ-ಆಗಸ್ಟ್ ಪ್ರವಾಹ – ಕೇಂದ್ರ ಸರ್ಕಾರದಿಂದ ಅನುದಾನ ನಿರೀಕ್ಷಿಸಲಾಗಿದೆ.<br>2021ನೇ ಸಾಲಿನ ಅಕ್ಟೋಬರ್-ನವೆಂಬರ್ ಪ್ರವಾಹ – ಕೇಂದ್ರ ಸರ್ಕಾರದಿಂದ ಅನುದಾನ ನಿರೀಕ್ಷಿಸಲಾಗಿದೆ. |
| **(ಆ)** ಅನುದಾನ ಸಲುವಾಗಿ ಎಷ್ಟು ಬಾರಿ ನಿಯೋಗಗಳನ್ನು ದೆಹಲಿಗೆ ಕರೆದೊಯ್ಯಲಾಗಿದೆ; | ರಾಜ್ಯದಲ್ಲಿ ತೀವ್ರ ಪ್ರಮಾಣದಲ್ಲಿ ಉಂಟಾಗುವ ಅತಿವೃಷ್ಟಿ/ಪ್ರವಾಹ ಪರಿಹಾರಕ್ಕಾಗಿ ಆರ್ಥಿಕ ನೆರವನ್ನು ಕೋರುತ್ತಾ, ಕೇಂದ್ರ ಸರ್ಕಾರಕ್ಕೆ ಮೆಮೋರಾಂಡಮ್ ಸಲ್ಲಿಸಲಾಗುತ್ತದೆ. ಇದರನ್ವಯ ಕೇಂದ್ರೀಯ ಅಧ್ಯಯನ ತಂಡವನ್ನು ರಾಜ್ಯಕ್ಕೆ ಕೇಂದ್ರ ಸರ್ಕಾರದಿಂದ ನಿಯೋಜಿಸಲಾಗುತ್ತದೆ. ಸದರಿ ತಂಡದ ವರದಿಯನುಸಾರ ಕೇಂದ್ರೀಯ ಉನ್ನತ ಮಟ್ಟದ ಸಮಿತಿಯ ಶಿಫಾರಸ್ಸಿನಂತೆ ರಾಜ್ಯ ಸರ್ಕಾರಕ್ಕೆ NDRF ರಡಿ ಅನುದಾನ ಮಂಜೂರು ಮಾಡಲಾಗುತ್ತದೆ. ಸದರಿ ಸಮಿತಿಯು ನೀಡಿದ ಶಿಫಾರಸ್ಸಿನನ್ವಯ ಕೇಂದ್ರೀಯ ಹಣಕಾಸು ಮಂತ್ರಾಲಯದಿಂದ NDRFರಡಿ ಅನುದಾನವನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆಗೊಳಿಸಲಾಗುತ್ತದೆ. |
| **(ಇ)** ಬೆಂಗಳೂರು ನಗರದ ನೆರೆ ಹಾವಳಿಗೆ ವ್ಯಯಿಸಿರುವ ಅನುದಾನವೆಷ್ಟು? | ಬೆಂಗಳೂರು ನಗರ ಜಿಲ್ಲೆಯಲ್ಲಿ 2019 ಹಾಗೂ 2020ನೇ ಸಾಲಿನಲ್ಲಿ ಭಾರಿ ಪ್ರಮಾಣದ ಪ್ರವಾಹ ಪರಿಸ್ಥಿತಿ ಉಂಟಾಗಿರುವುದಿಲ್ಲ. ಆದ್ದರಿಂದ, ರಾಜ್ಯ ಪ್ರಕೃತಿ ವಿಕೋಪ ಪರಿಹಾರ ನಿಧಿ (SDRF)ಯಡಿ ಯಾವುದೇ ಅನುದಾನವನ್ನು ಬಿಡುಗಡೆಗೊಳಿಸಿರುವುದಿಲ್ಲ.<br><br>ಪ್ರವಾಹ ಪರಿಹಾರಕ್ಕಾಗಿ 2021ನೇ ಸಾಲಿನಲ್ಲಿ ರಾಜ್ಯ ಪ್ರಕೃತಿ ವಿಕೋಪ ಪರಿಹಾರ ನಿಧಿ (SDRF)ಯಡಿ ರೂ.396.38ಲಕ್ಷಗಳನ್ನು ಬೆಂಗಳೂರು ನಗರ ಜಿಲ್ಲೆಗೆ ಬಿಡುಗಡೆಗೊಳಿಸಲಾಗಿದೆ. |

ಕಂಇ 527 ಟಿಎನ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು